# ಕರ್ನಾಟಕ ವಿಧಾನ ಪರಿಷತ್ತು

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 717 (896) |
|---|---|---|
| ಸದಸ್ಯರ ಹೆಸರು | | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 20.09.2021 |
| ಉತ್ತರಿಸಬೇಕಾದ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| (ಅ) | ಪದವಿ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರ ಸಂಖ್ಯೆ ಎಷ್ಟು; | ಪ್ರಸ್ತುತ 2020-21ನೇ ಸಾಲಿನಲ್ಲಿ ಸೇವೆ ಸಲ್ಲಿಸಿರುವ ಅತಿಥಿ ಉಪನ್ಯಾಸಕರ ಸಂಖ್ಯೆ ಒಟ್ಟು 14,183 |
| (ಆ) | ಈ ಅತಿಥಿ ಉಪನ್ಯಾಸಕರಿಗೆ ನಿಗದಿಪಡಿಸಲಾದ ವೇತನದ ಮೊತ್ತ ಎಷ್ಟು; ಪ್ರತಿ ತಿಂಗಳು ಸಮಯಕ್ಕೆ ಸರಿಯಾಗಿ ವೇತನ ಪಾವತಿ ಮಾಡಲಾಗುತ್ತಿದೆಯೇ; | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇ.55ರಷ್ಟು ಅಂಕಗಳನ್ನು ಪಡೆದಿದ್ದು, ಎನ್ಇಟಿ/ ಎಸ್ಎಲ್ಇಟಿ ಅಥವಾ ಪಿ.ಹೆಚ್‌ಡಿ ಪಡೆದುಕೊಂಡಿರುವ ಅತಿಥಿ ಉಪನ್ಯಾಸಕರಿಗೆ ರೂ.13,000/- ಹಾಗೂ ಸ್ನಾತಕೋತ್ತರ/ಎಂ.ಫಿಲ್ ಪದವೀಧರ ಅತಿಥಿ ಉಪನ್ಯಾಸಕರಿಗೆ ರೂ.11,000/-ಗಳನ್ನು ಪಾವತಿಸಲಾಗುತ್ತಿದೆ.<br><br>ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆ ಪಾವತಿಸಲು ವೇತನೇತರ ಬಾಬ್ತಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಅನುದಾನವನ್ನು ನಿಗಧಿಪಡಿಸಲಾಗಿರುತ್ತದೆ. ಅನುದಾನವನ್ನು **ನಾಲ್ಕು ತ್ರೈಮಾಸಿಕ** ಕಂತಿನಲ್ಲಿ ಬಿಡುಗಡೆ ಮಾಡುವುದರಿಂದ, ಪ್ರತಿ ಕಂತಿನ ಅನುದಾನ ಬಿಡುಗಡೆಯಾದ ಕೂಡಲೇ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆ ಪಾವತಿಸಲು ಕ್ರಮವಹಿಸಲಾಗುತ್ತಿದ್ದು, ಪ್ರಸ್ತುತ, ಆಗಸ್ಟ್ 2021ರ ಮಾಹೆವರೆಗೂ ಗೌರವಧನವನ್ನು ಪಾವತಿಸಲು ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. |
| (ಇ) | ಕೋವಿಡ್-19 ಸಮಸ್ಯೆ ಹಿನ್ನಲೆಯಲ್ಲಿ ಲಾಕ್‌ಡೌನ್ ಸಂದರ್ಭದಲ್ಲಿ ಎಷ್ಟು ತಿಂಗಳ ವೇತನವನ್ನು ಬಿಡುಗಡೆ ಮಾಡುವುದು ಬಾಕಿ ಇರುತ್ತದೆಯೇ; (ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇಡಿ /166/ ಹೆಚ್‌ಪಿಸಿ/2020, ದಿನಾಂಕ: 13.11.2020 ರಂತೆ 2019-20ನೇ ಶೈಕ್ಷಣಿಕ ಸಾಲಿನಲ್ಲಿ ನೇಮಕಗೊಂಡಿದ್ದ ಅತಿಥಿ ಉಪನ್ಯಾಸಕರುಗಳಿಗೆ ಲಾಕ್‌ಡೌನ್ ಅವಧಿಯಲ್ಲಿ ಮಾರ್ಚ್ 23, 2020 ರಿಂದ ಆಗಸ್ಟ್ 2020 ರವರೆಗೆ ಐದು ತಿಂಗಳ ಅವಧಿಗೆ ಕರ್ತವ್ಯದ ಅವಧಿ ಎಂದು ಮತ್ತು ವಿಶೇಷ ಪ್ರಕರಣವೆಂದು ಪರಿಗಣಿಸಿ ಒಟ್ಟು ರೂ.80,95,07,061/- ಗಳ ಗೌರವಧನವನ್ನು ಪಾವತಿಸಲಾಗಿರುತ್ತದೆ. |
| (ಈ) | ಈ ಎಲ್ಲಾ ಅತಿಥಿ ಉಪನ್ಯಾಸಕರಿಗೆ ನೀಡಲಾಗುತ್ತಿರುವ ಸೇವಾ ಸೌಲಭ್ಯಗಳ ವಿವರಗಳನ್ನು ಒದಗಿಸುವುದು; ಇವರೆಲ್ಲರ | ಸರ್ಕಾರಿ ಪದವಿ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗೆ ಅನುಗುಣವಾಗಿ ಉಂಟಾಗುವ ಕಾರ್ಯಭಾರವನ್ನು ಮೊದಲು ಆಯಾ ಕಾಲೇಜಿನ |

| | | |
|---|---|---|
| | ಸೇವಾ ಸಕ್ರಮಾತಿಗೊಳಿಸುವ ಕುರಿತು ಸರ್ಕಾರದ ನಿಲುವೇನು? | ಖಾಯಂ ಅಧ್ಯಾಪಕರುಗಳಿಗೆ ಹಂಚಿಕೆ ಮಾಡಿ, ತದನಂತರ ಉಳಿಕೆಯಾಗುವ ಕಾರ್ಯಭಾರಕ್ಕೆ ಆಯಾ ಶೈಕ್ಷಣಿಕ ವರ್ಷಕ್ಕೆ ಸೀಮಿತಗೊಳಿಸಿ ತಾತ್ಕಾಲಿಕವಾಗಿ ಕಲಾ ಮತ್ತು ವಾಣಿಜ್ಯ ವಿಷಯಕ್ಕೆ ವಾರಕ್ಕೆ ಗರಿಷ್ಠ 8 ಗಂಟೆ ಹಾಗೂ ವಿಜ್ಞಾನ ವಿಷಯಕ್ಕೆ 10 ಗಂಟೆಗಳ ಕಾರ್ಯಭಾರಕ್ಕೆ ಒಬ್ಬರಂತೆ ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ. ಅಲ್ಲದೆ, ಅತಿಥಿ ಉಪನ್ಯಾಸಕರನ್ನು ಹೆಚ್ಚುವರಿ ಕಾರ್ಯಭಾರಕ್ಕೆ ಅನುಗುಣವಾಗಿ ಮಾತ್ರ ಆಯ್ಕೆ ಮಾಡಿಕೊಳ್ಳಲಾಗುತ್ತಿದ್ದು, ಯಾವುದೇ ಖಾಲಿ ಹುದ್ದೆಗಳಿಗೆ ಅಥವಾ ಪೂರ್ಣಕಾಲಿಕ ಕಾರ್ಯಭಾರಕ್ಕೆ ನೇಮಕಾತಿ ಮಾಡಿಕೊಳ್ಳಲಾಗುತ್ತಿದ್ದು, ಈ ಕರ್ತವ್ಯ ನಿರ್ವಹಣೆಗೆ ಗೌರವಧನ ಪಾವತಿಸಲಾಗುತ್ತಿದೆ.<br><br>ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ/55/ಡಿಸಿಇ/2005, ದಿನಾಂಕ:25.08.2012 ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಕಾಲೇಜುಗಳಲ್ಲಿ 1995-1996 ರಿಂದ 2002-03ರ ಶೈಕ್ಷಣಿಕ ವರ್ಷಗಳಲ್ಲಿ ಸತತವಾಗಿ ಎರಡು ವರ್ಷ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದವರ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸದಿರುವ ಬಗ್ಗೆ ಸ್ಪಷ್ಟನೆ ನೀಡಲಾಗಿದ್ದು, ಅದರಂತೆ, ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಕಾಲೇಜುಗಳಲ್ಲಿ 1995-96 ರಿಂದ 2002-03ರ ಶೈಕ್ಷಣಿಕ ವರ್ಷಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದ ವ್ಯಕ್ತಿಗಳ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಸಕ್ರಮಾತಿಗೊಳಿಸಿದಲ್ಲಿ, ಅದು Perpetuate an illegality in the matter of public employment ಆಗುವುದರಿಂದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಉಮಾದೇವಿ ಪ್ರಕರಣದಲ್ಲಿ ವ್ಯಕ್ತಪಡಿಸಿರುವ ನಿಲುವಿನ ವಿರುದ್ಧವಾಗಿರುತ್ತದೆ. ಆದುದರಿಂದ 1995-96 ರಿಂದ 2002-03ರ ಶೈಕ್ಷಣಿಕ ವರ್ಷಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದ ವ್ಯಕ್ತಿಗಳು ತಮ್ಮ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ಕೋರಿಕೆ ಸಲ್ಲಿಸಿದ್ದಲ್ಲಿ, ಅವುಗಳನ್ನು ಮೇಲೆ ತಿಳಿಸಿರುವ ಕಾರಣಗಳನ್ನು ಉಲ್ಲೇಖಿಸಿ ತಿರಸ್ಕರಿಸಲಾಗಿರುತ್ತದೆ<br><br>ಈ ಹಿನ್ನೆಲೆಯಲ್ಲಿ 1994-95 ರ ನಂತರ ಅರೆಕಾಲಿಕ ಉಪನ್ಯಾಸಕರಾಗಿ ನೇಮಕಗೊಂಡವರನ್ನು ಮತ್ತು 2004-05ರ ನಂತರ ಅತಿಥಿ ಉಪನ್ಯಾಸಕರಾಗಿ ನೇಮಕಗೊಂಡು ಕಾರ್ಯನಿರ್ವಹಿಸುತ್ತಿರುವವರನ್ನು ಯಾವುದೇ ಕಾರಣಕ್ಕೂ ಸಕ್ರಮಗೊಳಿಸಲಾಗುವುದಿಲ್ಲ. ಅದು ಕಾನೂನು ವಿರುದ್ಧವಾದದ್ದು ಹಾಗೂ ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದದ್ದು, ಆದುದರಿಂದ, ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ/ಮುಂದೆ ಉದ್ಭವಿಸಬಹುದಾದ ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕವೇ ತುಂಬಬೇಕಾಗುತ್ತದೆ ಎಂಬುದಾಗಿ ದಿನಾಂಕ: 25.08.2012 ರ ಸರ್ಕಾರದ ಸುತ್ತೋಲೆಯಲ್ಲಿ ಸ್ಪಷ್ಟವಾಗಿ ತಿಳಿಸಲಾಗಿರುತ್ತದೆ. |

| | | |
|---|---|---|
| | | ಮುಂದುವರೆದು, ಅತಿಥಿ ಉಪನ್ಯಾಸಕರ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ಕೋರಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ:4625-4640/2012 (ಶ್ರೀ ವೀರಣ್ಣ ಎಸ್. ಸಜ್ಜನರ್ ಮತ್ತು ಇತರರು), ಅರ್ಜಿ ಸಂಖ್ಯೆ:2526-2532/2014, (ಶ್ರೀ ಕೆ.ಆರ್.ವಿಶ್ವಕುಮಾರ್ & ಇತರರು), ಅರ್ಜಿ ಸಂಖ್ಯೆ:1579-1585/2017 (ಶ್ರೀ ಜಯಚಂದ್ರ ಕೆ.ಇ. & ಇತರರು) ಮತ್ತು ಇತ್ತೀಚಿನ ಅರ್ಜಿ ಸಂಖ್ಯೆ:823-839/2020 (ಶ್ರೀ ಸಕಲೇಶ್ ಹೆಚ್.ಜಿ & ಇತರರು) ಗಳಿಗೆ ಮಾನ್ಯ ನ್ಯಾಯಮಂಡಳಿಯು ನೀಡಿದ ತೀರ್ಪಿನಲ್ಲಿ 'ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ತಾತ್ಕಾಲಿಕ ನೌಕರರನ್ನು ಅವರ ಸೇವಾವಧಿಯನ್ನು ಆಧರಿಸಿ ಸೇವಾ ಸಕ್ರಮಾತಿಗೆ ಪರಿಗಣಿಸಲು ಅರ್ಹರಾಗಿರುವುದಿಲ್ಲವೆಂದು, ಅದೇ ರೀತಿ, ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ವ್ಯಕ್ತಿಗಳಿಗೆ ಸಕ್ರಮಾತಿಯ ಹಕ್ಕು ದೊರೆಯುವುದಿಲ್ಲವೆಂದು ಹಾಗೂ ಇಂತಹ ನಿಯಮಬಾಹಿರ ನೇಮಕಾತಿಯನ್ನು ಸಕ್ರಮಾತಿಗೊಳಿಸಬಾರದೆಂದು' ತಿಳಿಸಿರುವ ನಿಲುವನ್ನು ಆಧರಿಸಿ ಸದರಿ ಅರ್ಜಿಗಳನ್ನು ವಜಾಗೊಳಿಸಿರುತ್ತದೆ.<br>ಈ ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಅತಿಥಿ ಉಪನ್ಯಾಸಕರ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ, ಸೇವೆಯಲ್ಲಿ ಖಾಯಂಗೊಳಿಸಿ, ಸೇವಾ ಭದ್ರತೆಯನ್ನು ನೀಡಲು ನಿಯಮಗಳಲ್ಲಿ ಅವಕಾಶ ಇರುವುದಿಲ್ಲ. |

ಇಡಿ 166 ಡಿಸಿಇ 2021

(ಡಾ.ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ ಸಚಿವರು